## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 1554
2. ಸದಸ್ಯರ ಹೆಸರು : ಶ್ರೀ ಎನ್.ರವಿಕುಮಾರ್
3. ಉತ್ತರಿಸಬೇಕಾದ ದಿನಾಂಕ : 18.03.2021
4. ಉತ್ತರಿಸುವ ಸಚಿವರು : ಸಣ್ಣ ನೀರಾವರಿ ಸಚಿವರು.

| ಕ್ರ ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ | ಚಿಕ್ಕಮಗಳೂರು ತಾಲ್ಲೂಕಿನ ಬೆಳವಾಡಿ ದೊಡ್ಡಕೆರೆಯ ಅಭಿವೃದ್ಧಿಗೆ ಸರ್ಕಾರ ಎಷ್ಟು ಮೊತ್ತದ ಆಡಳಿತಾತ್ಮಕ ಅನುಮೋದನೆ ನೀಡಿತ್ತು; ಸದರಿ ಯೋಜನೆಯನ್ನು ಪುನರ್ ವಿನ್ಯಾಸ ಮಾಡಲು ಶಿಫಾರಸ್ಸು ಮಾಡಲಾಗಿದೆಯೇ; ಯಾರು ಮತ್ತು ಯಾವ ಕಾರಣಗಳಿಗೆ ಕುರಿತು ಮಾಹಿತಿ ನೀಡುವುದು;: | ಚಿಕ್ಕಮಗಳೂರು ಜಿಲ್ಲೆ ಚಿಕ್ಕಮಗಳೂರು ತಾಲ್ಲೂಕು ಬೆಳವಾಡಿ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯು ರೂ.350.00 ಲಕ್ಷಗಳಿಗೆ ಸರ್ಕಾರದ ಪತ್ರಸಂಖ್ಯೆ: ಸನೀಇ/ 10/ ನಯೋಕಾ/ 2007, ದಿನಾಂಕ:13.05.2008, ಬೆಂಗಳೂರು ರವರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ತದನಂತರ ಸ್ಥಳಕ್ಕನುಗುಣವಾಗಿ ಕಾಮಗಾರಿ ನಿರ್ವಹಿಸುವಾಗ ಉಂಟಾದ ತಾಂತ್ರಿಕ ಅಡೆತಡೆಗಳನ್ನು ನಿವಾರಿಸಲು ಮುಖ್ಯ ಇಂಜಿನಿಯರ್ ಮತ್ತು ಅಧೀಕ್ಷಕ ಇಂಜಿನಿಯರ್‌ರವರುಗಳ ಪರಿವೀಕ್ಷಣಾ ವರದಿಗಳಂತೆ ಹಾಗೂ ದಿ:10-07-2017 ರಂದು ನಡೆದ 2ನೇ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ ಸಭೆಯ ಶಿಫಾರಸ್ಸಿನ ಮೇರೆಗೆ ಆರ್ಥಿಕ ಇಲಾಖೆಯ ಸಹಮತಿ ಹಾಗೂ ಸಚಿವ ಸಂಪುಟದ ನಿರ್ಣಯದಂತೆ ಸರ್ಕಾರದ ಆದೇಶ ಸಂಖ್ಯೆ: ಸನೀಇ/ 31/ ಕೆಜಿದು (ತಾಂತ್ರಿಕ)/2017, ದಿನಾಂಕ:07.09.2018 ಬೆಂಗಳೂರು ರಲ್ಲಿ ಪರಿಷ್ಕೃತ ಅಂದಾಜು ಮೊತ್ತ ರೂ.1750.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ. ಸದರಿ ಕಾಮಗಾರಿಯಲ್ಲಿ ಯಾವುದೇ ಪುನರ್ ವಿನ್ಯಾಸ ಮಾಡಲಾಗಿರುವುದಿಲ್ಲ. |
| ಆ | ಈ ಕಾಮಗಾರಿಯಲ್ಲಿ ಭ್ರಷ್ಟಾಚಾರ ವೆಸಗಿರುವ ಕುರಿತು ಸರ್ಕಾರದ ನಿಲುವೇನು; ಭ್ರಷ್ಟಾಚಾರ ವೆಸಗಿದ ಅಧಿಕಾರಿಗಳ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ; ಸದರಿ ಮೊತ್ತವನ್ನು ಅದೇ ಅಧಿಕಾರಿಯಿಂದ ವಸೂಲಿ ಮಾಡಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ; | ಬೆಳವಾಡಿ ದೊಡ್ಡಕೆರೆ ಅಭಿವೃದ್ಧಿ ಕಾಮಗಾರಿಯನ್ನು ಸ್ಥಳಕ್ಕನುಗುಣವಾಗಿ ಕಾಮಗಾರಿ ನಿರ್ವಹಿಸಿದ್ದರಿಂದ ಹಾಗೂ ಅಂದಾಜಿನಲ್ಲಿ ಭೂಸ್ವಾಧೀನಕ್ಕೆ ನಿಗದಿಪಡಿಸಿದ್ದ ಮೊತ್ತಕ್ಕಿಂತ ಹೆಚ್ಚಿನ ವಿಸ್ತೀರ್ಣದ ಭೂಮಿಯನ್ನು ಭೂಸ್ವಾಧೀನ ಪಡಿಸಿಕೊಂಡಿದ್ದರನ್ವಯ ಕಾಮಗಾರಿಯ ಅಂದಾಜು ಮೊತ್ತದಲ್ಲಿ ಹೆಚ್ಚುವರಿ ವೆಚ್ಚವಾಗಿರುತ್ತದೆ. ಸದರಿ ಕಾಮಗಾರಿಗೆ ಸಂಬಂಧಿಸಿದಂತೆ ಯಾವುದೇ ಭ್ರಷ್ಟಾಚಾರ ನಡೆದಿರುವ ಪ್ರಕರಣ ಗಮನಕ್ಕೆ ಬಂದಿರುವುದಿಲ್ಲ. |
| ಇ | ಒಂದು ಏತ ನೀರಾವರಿ ಕಾಮಗಾರಿಯ ಚಾಲನೆಯಲ್ಲಿದ್ದಾಗ ಅದೇ ಕಾಮಗಾರಿಯನ್ನು ಮುಂದುವರೆಸಿ ಪೂರ್ಣಗೊಳಿಸದೆ ಹೊಸ ಏತ ನೀರಾವರಿ ಯೋಜನೆ ಜಾರಿಗೊಳಿಸಲು ಕಾರಣವೇನು? | ಚಿಕ್ಕಮಗಳೂರು ತಾಲ್ಲೂಕಿನ ಬೆಳವಾಡಿ ದೊಡ್ಡಕೆರೆ ಕಾಮಗಾರಿಯಲ್ಲಿ ಕರಗಡ ದೇವಿಕೆರೆಯಿಂದ ಹರಿಯುವ ನೀರನ್ನು ಸುಮಾರು 4.5 ಕಿ.ಮೀ ಉದ್ದದ ಮಣ್ಣು ಕಾಲುವೆ ನಿರ್ಮಾಣ ಕಾಮಗಾರಿ ಪೂರ್ಣಗೊಳಿಸಿ ತದನಂತರ ನೈಸರ್ಗಿಕ ಹಳ್ಳದ ಮುಖಾಂತರ 8 ಕಿ.ಮೀ ಹರಿದು ಸುತ್ತಮುತ್ತಲಿನ ಜಮೀನು ಹಾಗೂ ಕೊಳವೆಬಾವಿ/ ಇತರ ಬಾವಿಗಳಲ್ಲಿ ನೀರಿನ ಅಂತರ್ಜಲ ಮಟ್ಟ ಅಭಿವೃದ್ಧಿಗೊಳಿಸಲು ಹಾಗೂ ಸರಣಿ ಕೆರೆಗಳನ್ನು ತುಂಬಿಸಲು ಉದ್ದೇಶಿಸಲಾಗಿತ್ತು. ಸದರಿ ಯೋಜನೆಯನ್ನು 2019-20 ನೇ ಸಾಲಿನಲ್ಲಿ ಭೌತಿಕವಾಗಿ ಪೂರ್ಣಗೊಳಿಸಿ ಅಂತಿಮ ಬಿಲ್ಲು ಸಲ್ಲಿಸಲಾಗಿರುತ್ತದೆ. 2019-20 ನೇ ಸಾಲಿನಲ್ಲಿ ಅಭಿವೃದ್ಧಿಪಡಿಸಿದ ಕಾಲುವೆಯಲ್ಲಿ ನೀರನ್ನು ಹರಿಸಿ |

| | | |
|---|---|---|
| | | ಕಳಸಾಪುರ ಊರಮುಂದಿನಕೆರೆ & ಕಳಸಾಪುರ ತಿಮ್ಮಪ್ಪನಾಯ್ಕನ ಕೆರೆ ತುಂಬಿಸಲಾಗಿರುತ್ತದೆ. 2020-21ನೇ ಸಾಲಿನಲ್ಲಿ ಕಳಸಾಪುರ ಊರಮುಂದಿನಕೆರೆ, ಕಳಸಾಪುರ ತಿಮ್ಮಪ್ಪನಾಯ್ಕನ ಕೆರೆ ಪೂರ್ಣ ತುಂಬಿಸಿದ್ದು ಈಶ್ವರಹಳ್ಳಿ ಊರಮುಂದಿನ ಕೆರೆಯನ್ನು 80% ತುಂಬಿಸಲಾಗಿರುತ್ತದೆ. ಯೋಜನೆಯ ಉದ್ದೇಶಿತ ಫಲಶೃತಿಯನ್ನು ಸಾಧಿಸಲಾಗಿದೆ.<br>ಸದರಿ ಯೋಜನೆಯಲ್ಲಿ ನಾಲೆಯ ಪಾರ್ಶ್ವಗಳಲ್ಲಿ ಮೆದುಬಂಡೆ ಹಾಗೂ ಮರಳು ಮಿಶ್ರಿತ ಮಣ್ಣು ಇರುವುದರಿಂದ ನಾಲೆಯ ಪಾರ್ಶ್ವಗಳು ಸ್ಥಿರವಾಗಿರದೆ ಅಕ್ಕಪಕ್ಕದ ಮಣ್ಣು ಕಾಲುವೆ ಒಳಗೆ ಬೀಳುತ್ತಿರುವುದರಿಂದ ಗ್ರಾವಿಟಿ ಮೂಲಕ ನೀರು ಹರಿಯುವುದು ಕಷ್ಟಸಾಧ್ಯವಾಗಿರುತ್ತದೆ ಎಂಬ ವಿಷಯವನ್ನು ಇಲಾಖೆಯು ಮನಗಂಡು ಇಲಾಖೆಯು ರಚಿಸಿರುವ ನಿವೃತ್ತ ಕಾರ್ಯದರ್ಶಿಗಳು, ಜಲ ಸಂಪನ್ಮೂಲ ಇಲಾಖೆ ಹಾಗೂ ನಿವೃತ್ತ ಮುಖ್ಯ ಇಂಜಿನಿಯರಗಳನ್ನೊಳಗೊಂಡ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿಯ ಸಭೆಯ (ದಿ: 10-01-2020 ರಂದು ನಡೆದ ಸಭೆ) ತೀರ್ಮಾನದಂತೆ ಕರಗಡ ದೇವಿಕೆರೆಯಲ್ಲಿ ಕೇವಲ 90 ರಿಂದ 120 ದಿನಗಳು ಹೆಚ್ಚುವರಿಯಾಗಿ ನೀರು ಹರಿಯುವುದರಿಂದ ಲಭ್ಯವಿರುವ ಹೆಚ್ಚುವರಿ ನೀರನ್ನು ಸದುಪಯೋಗಗೊಳಿಸಿಕೊಳ್ಳಲು ಏತನೀರಾವರಿ ಮೂಲಕ 15 ಮೀ ಪಂಪಿಂಗ್ ಹೆಡ್‌ನ್ನು ಪಡೆಯುವ ಉದ್ದೇಶದಿಂದ ಹೊಸ ಏತ ನೀರಾವರಿ ಯೋಜನೆ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗಿದೆ. |

ಕಡತ ಸಂಖ್ಯೆ: MID 41 LCQ 2021

(ಜೆ.ಸಿ.ಮಾಧುಸ್ವಾಮಿ)
ಸಣ್ಣ ನೀರಾವರಿ ಸಚಿವರು.